ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಬೆಂಗಳೂರು ನಗರದಲ್ಲಿ ಹೈ-ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ಮನೆಗಳನ್ನು ಕಟ್ಟಿರುವ ಬಗ್ಗೆ

ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

793 (680) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹೈ-ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ಕಟ್ಟಡಗಳನ್ನು ಕಟ್ಟಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಅನುಮತಿಯನ್ನು ನೀಡಿದೆಯೇ; ನೀಡಿದ್ದಲ್ಲಿ, ಅನುಮತಿಯನ್ನು ನೀಡಲು ಇರುವ ಕಾನೂನು/ ನಿಯಮಗಳ ವಿವರಗಳನ್ನು ನೀಡುವುದು;

(ಆ) ನಿಯಮ ಮೀರಿ ಕಟ್ಟಡಗಳನ್ನು ಕಟ್ಟಲು ಅನುಮತಿಯನ್ನು ನೀಡಿರುವ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು; ಕ್ರಮ ಕೈಗೊಂಡ ಪ್ರಕರಣಗಳಿದ್ದಲ್ಲಿ ವಿವರಗಳನ್ನು ನೀಡುವುದು;

(ಇ) ಬೆಂಗಳೂರು ನಗರದಲ್ಲಿ ನಿಯಮ ಮೀರಿ ಹೈ-ಟೆನ್ಷನ್ ವಿದ್ಯುತ್ ತಂತಿ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಈ) ನಿಯಮ ಮೀರಿ ಹೈ-ಟೆನ್ಷನ್ ವಿದ್ಯುತ್ ತಂತಿ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸಲು ಇಂಧನ ಇಲಾಖೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯೊಂದಿಗೆ ಯಾವುದಾದರೂ ಪತ್ರ ವ್ಯವಹಾರ ಅಥವಾ ಸಭೆಯನ್ನು ನಡೆಸಿದೆಯೇ? (ವಿವರ ನೀಡುವುದು)